# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 506 |
| ಸದಸ್ಯರ ಹೆಸರು | ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | 09.03.2020 |
| ಉತ್ತರಿಸುವ ಸಚಿವರು | ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು |

| ಪ್ರಶ್ನೆ | ಉತ್ತರ |
|---|---|
| ಅ) ರಾಜ್ಯದಲ್ಲಿ ಐಟಿ-ಬಿಟಿ ಕಂಪನಿಗಳು ಕೇವಲ ನಗರಗಳಲ್ಲಿ ಸ್ಥಾಪನೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;<br>ಆ) ಗ್ರಾಮೀಣ ಭಾಗಗಳಲ್ಲಿ ಕಂಪನಿಗಳನ್ನು ಸ್ಥಾಪಿಸಲು ಸರ್ಕಾರದಿಂದ ಯಾವ ರೀತಿ ಉತ್ತೇಜನ ನೀಡಲಾಗುತ್ತಿದೆ; | ರಾಜ್ಯದ ಗ್ರಾಮೀಣ ಭಾಗಗಳು ಸೇರಿದಂತೆ ದ್ವಿತೀಯ ಹಾಗೂ ತೃತೀಯ ಹಂತದ ನಗರಗಳಲ್ಲಿ ಸ್ಥಾಪನೆಯಾಗುವ ಕಂಪನಿಗಳಿಗೆ ಸರ್ಕಾರವು ಘೋಷಿಸಿರುವ ಐ4, ಬಿಟಿ, ಕೆ.ಇ.ಎಸ್.ಡಿ.ಎಂ, ಸ್ಟಾರ್ಟ್‌ಅಪ್ ಮತ್ತು ಎವಿಜಿಸಿ ನೀತಿಗಳಲ್ಲಿ ಪ್ರಮುಖವಾಗಿ, ಸ್ಟಾರ್ಟ್‌ಅಪ್ ಕಂಪನಿಗಳನ್ನು ಪ್ರಾರಂಭಿಸಲು ಅವಕಾಶಗಳು, ಕರ್ನಾಟಕ ಕೈಗಾರಿಕಾ ಉದ್ಯೋಗ, ಆದೇಶ ನಿಯಮ 1946 ರಿಂದ IT/ITes/knowledge/Startup ಕೈಗಾರಿಕೆಗಳಿಗೆ ವಿನಾಯ್ತಿ, ವಿದ್ಯುಚ್ಛಕ್ತಿ ದರದಲ್ಲಿ ರಿಯಾಯಿತಿ, ಸ್ಟಾಂಪ್ ಶುಲ್ಕದಲ್ಲಿ ವಿನಾಯಿತಿ, ತಾಂತ್ರಿಕತೆಯನ್ನು ಮೇಲ್ದರ್ಜೆಗೇರಿಸಿಕೊಳ್ಳುವುದಕ್ಕಾಗಿ MSMEಗಳಿಗೆ 5 ವರ್ಷಗಳಿಗೆ ಗರಿಷ್ಠ ರೂ 50 ಲಕ್ಷಗಳ ಸಾಲಕ್ಕಾಗಿ ಬಡ್ಡಿ ಸಹಾಯಧನ (6%), ಕರ್ನಾಟಕ ರಾಜ್ಯದಲ್ಲಿ ಸ್ಥಾಪನೆಯಾಗುವ ಎಲೆಕ್ಟ್ರಾನಿಕ್ ಸಿಸ್ಟಮ್ ವಿನ್ಯಾಸ ಮತ್ತು ತಯಾರಿಕಾ ವಲಯಗಳಿಗೆ ಬಂಡವಾಳ ಹೂಡಿಕೆ ಮಾಡಲು ಉತ್ತೇಜನ, ಐಡಿಯಾ ಟು ಪಿಓಸಿ ಫಂಡಿಂಗ್ ಯೋಜನೆಯ ಮೂಲಕ ಆರಂಭಿಕ ಹಂತದ ಹಣಕಾಸು ಒದಗಿಸುವುದು, ಕರ್ನಾಟಕದಲ್ಲಿ ಸ್ಟಾರ್ಟ್‌ಅಪ್ ಇನ್ಕ್ಯುಬೇಟರ್ ಗಳಿಂದ ಪಾವತಿಯಾಗಿರುವ ಸೇವಾ ತೆರಿಗೆಗಳ ಮರುಪಾವತಿ, ಮಹಿಳೆಯರಿಗೆ ಉದ್ಯಮಶೀಲತೆ ಪ್ರೋತ್ಸಾಹ, ತಂತ್ರಜ್ಞಾನ ಉನ್ನತೀಕರಣದ ಮೇಲಿನ ಬಡ್ಡಿ ಸಹಾಯಧನ, ರಫ್ತು ಆಧಾರಿತ ಉದ್ದಿಮೆಗಳಿಗೆ ಉತ್ತೇಜಕಗಳು, ಪೇಟೆಂಟ್ ನೋಂದಣಿ, ಮಾರುಕಟ್ಟೆ ಪ್ರೋತ್ಸಾಹಕಗಳು, ಯೋಜನಾ ವರದಿಯ ಸಿದ್ಧತೆಗಾಗಿನ ವೆಚ್ಚಗಳ ಮರುಭರಿಸುವಿಕೆ ಇತ್ಯಾದಿ ಉತ್ತೇಜನಗಳನ್ನು ನೀಡಿ ಪ್ರೋತ್ಸಾಹಿಸಲಾಗುತ್ತಿದೆ. |
| ಇ) ಗ್ರಾಮೀಣ ಭಾಗದ ಯುವಕರು ನಗರ ಪ್ರದೇಶಕ್ಕೆ ವಲಸೆ ಬಂದಿರುವ ಬಗ್ಗೆ ಸರ್ಕಾರದ ಬಳಿ ಅಂಕಿ ಅಂಶಗಳು ಇವೆಯೇ; (ವಿವರ ನೀಡುವುದು) | ಗ್ರಾಮೀಣ ಭಾಗದ ಯುವಕರು ನಗರ ಪ್ರದೇಶಕ್ಕೆ ವಲಸೆ ಬಂದಿರುವ ಬಗ್ಗೆ ಅಂಕಿ-ಅಂಶಗಳು ಈ ಇಲಾಖೆಯಲ್ಲಿ ಇರುವುದಿಲ್ಲ.. |

...2

| | |
|---|---|
| ಈ) ಗ್ರಾಮೀಣ ಭಾಗದ ಯುವಕರು ನಗರ ಪ್ರದೇಶಗಳಿಗೆ ವಲಸೆ ಬಾರದಂತೆ ತಡೆಯಲು ಯಾವ ಕ್ರಮ ಕೈಗೊಳ್ಳಲಾಗಿದೆ? | ಗ್ರಾಮೀಣ ಭಾಗದ ಯುವಕರು ನಗರ ಪ್ರದೇಶಗಳಿಗೆ ವಲಸೆ ಬಾರದಂತೆ ತಡೆಯುವ ಸಲುವಾಗಿ ಹಾಗೂ ವಿವಿಧ ಜಿಲ್ಲೆಗಳ ನಿರುದ್ಯೋಗಿಗಳಿಗೆ ಉದ್ಯೋಗಾವಕಾಶಕ್ಕೆ ಅನುಕೂಲವಾಗುವ ನಿಟ್ಟಿನಲ್ಲಿ ಈ ಕೆಳಕಂಡ ಕ್ರಮಕೈಗೊಳ್ಳಲಾಗಿದೆ:<br>• ಗ್ರಾಮೀಣ ನಿರುದ್ಯೋಗಿಗಳಿಗೆ ಸೂಕ್ತ ತರಬೇತಿ ನೀಡಿ ಉದ್ಯೋಗ ಕಲ್ಪಿಸುವ ಸಲುವಾಗಿ ರೂ 40ಲಕ್ಷಗಳ ವರೆಗೆ ಸರ್ಕಾರದ ಧನಸಹಾಯದೊಂದಿಗೆ ಗ್ರಾಮೀಣ ಬಿ.ಪಿ.ಓ ಕೇಂದ್ರಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗಿದ್ದು, ಇದರನ್ವಯ, ರಾಜ್ಯಾದಾದ್ಯಂತ ಸುಮಾರು 30 ಬಿ.ಪಿ.ಓ ಕೇಂದ್ರಗಳು ಸ್ಥಾಪನೆಯಾಗಿದ್ದು, ಅಂದಾಜು ಮೂರು ಸಾವಿರ ಗ್ರಾಮೀಣ ಪ್ರದೇಶದ ಜನರಿಗೆ ಉದ್ಯೋಗಾವಕಾಶ ಕಲ್ಪಿಸಿದೆ.<br>• ಈಗಾಗಲೇ ಸರ್ಕಾರ/ಸರ್ಕಾರದ ಅಧೀನದಲ್ಲಿರುವ ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಹುಬ್ಬಳ್ಳಿ, ಶಿವಮೊಗ್ಗ ಹಾಗೂ ಕಲ್ಬುರ್ಗಿ ಗಳಲ್ಲಿ ಎಲ್ಲಾ ಮೂಲಭೂತ ಸೌಕರ್ಯಗಳನ್ನು ಹೊಂದಿರುವ ಐಟಿ ಪಾರ್ಕ್‌ಗಳನ್ನು ಸ್ಥಾಪಿಸಲಾಗಿರುತ್ತದೆ.<br>• ಮೈಸೂರು, ಹುಬ್ಬಳ್ಳಿ-ಧಾರವಾಡ, ಮಂಗಳೂರು, ಕಲ್ಬುರ್ಗಿ, ಶಿವಮೊಗ್ಗ, ಬೆಳಗಾವಿ ಹಾಗೂ ಇತರೆ ಎರಡನೇ ಶ್ರೇಣಿ ನಗರಗಳಲ್ಲಿ ಐಟಿ-ಬಿಟಿ ಕಂಪನಿಗಳಲ್ಲಿ ಹೂಡಿಕೆ ಮಾಡಲು ಪೂರಕ ವಾತಾವರಣವನ್ನು ಸೃಜಿಸಲಾಗುತ್ತಿದೆ.<br>• ರಾಜ್ಯದ 30 ಕಾಲೇಜುಗಳಲ್ಲಿ ನ್ಯೂ ಏಜ್ ಇನ್ನೋವೇಷನ್ ಕೇಂದ್ರ (NAIN) ಸ್ಥಾಪಿಸಲಾಗಿರುತ್ತದೆ.<br>• ಬೆಳಗಾವಿ, ಶಿವಮೊಗ್ಗ, ಮಂಗಳೂರು, ಮೈಸೂರುಗಳಲ್ಲಿ ಕೆ-ಟೆಕ್ ಸಾಮಾನ್ಯ ಸಲಕರಣೆ ಸೌಲಭ್ಯಗಳನ್ನು ಸ್ಥಾಪಿಸಲಾಗಿದೆ.<br>• ಕೇಂದ್ರ ಸರ್ಕಾರದ ಇಎಸ್‌ಡಿಎಮ್ ತರಬೇತಿ ಯೋಜನೆಯಡಿಯಲ್ಲಿ ಇಲಾಖೆಯ ಮುಖಾಂತರ ಈಗಾಗಲೇ ರಾಜ್ಯದ 30 ಜಿಲ್ಲೆಗಳ ಗ್ರಾಮೀಣ ಪ್ರದೇಶಗಳಲ್ಲಿರುವ ಸುಮಾರು 14,447 ನಿರುದ್ಯೋಗಿಗಳಿಗೆ ಎಲೆಕ್ಟ್ರಾನಿಕ್ ಸಿಸ್ಟಮ್ ವಿನ್ಯಾಸ ಮತ್ತು ತಯಾರಿಕಾ ವಲಯಗಳಲ್ಲಿ ತರಬೇತಿಯನ್ನು ನೀಡಲಾಗಿರುತ್ತದೆ. |

**ಸಂಖ್ಯೆ: ಐಟಿಬಿಟಿ 08 ಎಲ್.ಸಿ.ಎಂ. 2020**

**(ಡಾ|| ಅಶ್ವತ್ಥ್ ನಾರಾಯಣ ಸಿ.ಎನ್)**
ಉಪಮುಖ್ಯಮಂತ್ರಿಗಳು ಹಾಗೂ
ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ,
ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ
ಮತ್ತು ತಂತ್ರಜ್ಞಾನ ಸಚಿವರು